## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **369**
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ.ಅಬ್ದುಲ್‌ಜಬ್ಬಾರ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 06-03-2020.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದೆ; ಅಂಗನವಾಡಿ ಕಾರ್ಯಕರ್ತೆಯರಿಗೆ ನೀಡುತ್ತಿರುವ ಗೌರವಧನ ಎಷ್ಟು; ಅವರ ದಿನದ ಕಾರ್ಯಾವಧಿ ಎಷ್ಟು; | ಪ್ರಸ್ತುತ ರಾಜ್ಯದಲ್ಲಿ ಕೇಂದ್ರ ಪುರಸ್ಕೃತ 65911 ಹಾಗೂ ರಾಜ್ಯ ಪುರಸ್ಕೃತ 350 ಅಂಗನವಾಡಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ.<br>**ಅಂಗನವಾಡಿ ಕಾರ್ಯಕರ್ತೆಯರಿಗೆ ನೀಡುತ್ತಿರುವ ಮಾಹೆಯಾನ ಗೌರವಧನದ ಮಾಹಿತಿ**<br>ಮುಖ್ಯ ಅಂಗನವಾಡಿ ಕಾರ್ಯಕರ್ತೆ — 10,000-00<br>ಮಿನಿ ಅಂಗನವಾಡಿ ಕಾರ್ಯಕರ್ತೆ — 6,250-00<br>ಅಂಗನವಾಡಿ ಕಾರ್ಯಕರ್ತೆಯರು ಬೆಳಿಗ್ಗೆ: 9.30 ರಿಂದ 4.00 ಗಂಟೆಯವರೆಗೆ ಕೇಂದ್ರದಲ್ಲಿದ್ದು ಕಾರ್ಯನಿರ್ವಹಿಸಿ, ನಂತರ ಮನೆ ಭೇಟಿಗೆ ತೆರಳುವರು. |
| ಆ. | ರಾಜ್ಯದಲ್ಲಿ ಉರ್ದು ಅಂಗನವಾಡಿ ಕೇಂದ್ರಗಳು ಇದೆಯೇ; ಇಲ್ಲದಿದ್ದಲ್ಲಿ, ಅಲ್ಪಸಂಖ್ಯಾಂತರ ಕಲ್ಯಾಣದ ದೃಷ್ಟಿಯಿಂದ ಅಲ್ಪಸಂಖ್ಯಾತರ ಹೆಚ್ಚಾಗಿರುವ ಸ್ಥಳಗಳಲ್ಲಿ ಉರ್ದು ಅಂಗನವಾಡಿ ಕೇಂದ್ರಗಳನ್ನು ಸ್ಥಾಪನೆ ಮಾಡುವ ಉದ್ದೇಶ ಸರ್ಕಾರಕ್ಕೆ ಇದೆಯೇ; | ರಾಜ್ಯದಲ್ಲಿ ಉರ್ದು ಅಂಗನವಾಡಿ ಕೇಂದ್ರಗಳು ಇರುವುದಿಲ್ಲ.<br>ಅಲ್ಪಸಂಖ್ಯಾತರು ಹೆಚ್ಚಾಗಿ ವಾಸಿಸುತ್ತಿರುವ 2792 ಸ್ಥಳಗಳಲ್ಲಿ ಅಂಗನವಾಡಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ.<br>ಪ್ರಸ್ತುತ ಉರ್ದು ಅಂಗನವಾಡಿ ಕೇಂದ್ರಗಳನ್ನು ಸ್ಥಾಪನೆ ಮಾಡುವ ಉದ್ದೇಶ ಸರ್ಕಾರದ ಮುಂದೆ ಇರುವುದಿಲ್ಲ. |
| ಇ. | ಅಂಗನವಾಡಿ ಕಾರ್ಯಕರ್ತೆಯರ ಬೇಡಿಕೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದ್ದಲ್ಲಿ ಸರ್ಕಾರದಿಂದ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಹೌದು,<br>ಅಂಗನವಾಡಿ ಕಾರ್ಯಕರ್ತೆಯರ ಪ್ರಮುಖ ಬೇಡಿಕೆಗಳು ಈ ಕೆಳಕಂಡಂತಿದೆ.<br>1. **ಕನಿಷ್ಠ ವೇತನ ನೀಡುವ ಕುರಿತು ಮತ್ತು ಹುದ್ದೆಯನ್ನು ಖಾಯಂಗೊಳಿಸುವ ಬಗ್ಗೆ:**<br>ಅಂಗನವಾಡಿ ಕಾರ್ಯಕರ್ತೆಯರು ಗೌರವ ಸೇವೆಗೆ ಸೇರಿದ್ದು ಗೌರವಧನ ಪಾವತಿಸಲಾಗುತ್ತಿದೆ. ಕನಿಷ್ಠವೇತನ ನಿಯಮ ಅನ್ವಯಿಸುವುದಿಲ್ಲ. ಇವರು ಗೌರವ ಸೇವೆಗೆ ಸೇರಿರುವುದರಿಂದ ಹುದ್ದೆ ಖಾಯಂಗೊಳಿಸುವ ವಿಷಯ ಅನ್ವಯಿಸುವುದಿಲ್ಲ.<br>2. **ಗೌರವಧನ ಹೆಚ್ಚಿಸಬೇಕು:**<br>ಕೇಂದ್ರ ಸರ್ಕಾರವು ದಿನಾಂಕ:01.10.2018 ರಿಂದ ಮುಖ್ಯ ಅಂಗನವಾಡಿ ಕಾರ್ಯಕರ್ತೆಯರ ಗೌರವಧನವನ್ನು ರೂ. 1,500/-,ಹಾಗೂ ಮಿನಿ ಅಂಗನವಾಡಿ ಕಾರ್ಯಕರ್ತೆಯರ ಗೌರವಧನವನ್ನು ರೂ. 1,250/-ಗಳನ್ನು ಹೆಚ್ಚಿಸಿ ಆದೇಶ |

| | | |
|---|---|---|
| | | ಹೊರಡಿಸಿರುತ್ತದೆ. ಅದರಂತೆ ರಾಜ್ಯ ಸರ್ಕಾರವು ದಿನಾಂಕ: 01.11.2019 ರಿಂದ ಮುಖ್ಯ ಅಂಗನವಾಡಿ ಕಾರ್ಯಕರ್ತೆಯರ ಗೌರವಧನವನ್ನು ರೂ.500/- ಹಾಗೂ ಮಿನಿ ಅಂಗನವಾಡಿ ಕಾರ್ಯಕರ್ತೆಯರ ಗೌರವಧನವನ್ನು ರೂ. 250/- ಗಳನ್ನು ಹೆಚ್ಚಿಸಿ ಆದೇಶಿಸಿರುತ್ತದೆ.<br>3. **ಅಂಗನವಾಡಿ ಕಾರ್ಯಕರ್ತೆಯರಿಗೆ ಆರೋಗ್ಯ ಕರ್ನಾಟಕ ಯೋಜನೆ ವಿಸ್ತರಿಸಬೇಕು.**<br>ಈ ಸಂಬಂಧ ಆರೋಗ್ಯ ಇಲಾಖೆಯ ಪರಿಶೀಲನೆಯಲ್ಲಿದೆ.<br>4. **ಪಿಂಚಣಿ ಸೌಲಭ್ಯ ಮತ್ತು ಇಡಗಂಟು ನೀಡಬೇಕು.**<br>ಎನ್‌ಪಿಎಸ್ ಲೈಟ್ ಯೋಜನೆಗೆ ಒಳಪಟ್ಟ ಅಂಗನವಾಡಿ ಕಾರ್ಯಕರ್ತೆಯರಿಗೆ ಯೋಜನೆಯ ಮಾರ್ಗಸೂಚಿಯಂತೆ ಪಿಂಚಣಿ ಸೌಲಭ್ಯ ನೀಡಲಾಗುತ್ತಿದೆ. ಈ ಯೋಜನೆಗೆ ಒಳಪಡದೆ ಇರುವ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ ಇಡಿಗಂಟು ನೀಡುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆ ಯಲ್ಲಿರುತ್ತದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಮಮಇ 39 ಐಸಿಡಿ 2020